# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1003 |
| ಸದಸ್ಯರ ಹೆಸರು | ಶ್ರೀ ಎನ್. ಅಪ್ಪಾಜಿಗೌಡ<br>(ಸ್ಥಳೀಯ ಸಂಸ್ಥೆಗಳಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | 22.12.2021 |
| ಉತ್ತರಿಸುವ ಸಚಿವರು | ಕಂದಾಯ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರೈತರಿಂದ ಪೋಡಿ/ ಭೂಮಾಪನ ಮತ್ತು ನಕ್ಷೆ ಕೋರಿ ಸಲ್ಲಿಕೆಯಾಗಿರುವ ಅರ್ಜಿಗಳ ಸಂಖ್ಯೆ ಎಷ್ಟು; | **2021-22 ನೇ ಸಾಲಿನಲ್ಲಿ ರಾಜ್ಯದಲ್ಲಿ ತತ್ಕಾಲ್ ಪೋಡಿ ಮತ್ತು 11ಇ ಹಾಗೂ ಅಳತೆ ಕೋರಿ ಸ್ವೀಕೃತವಾದ ಅರ್ಜಿಗಳ ಪ್ರಗತಿ ವಿವರ ಈ ಕೆಳಕಂಡಂತಿದೆ.**<br><br>ಪ್ರಾ. ಶಿಲ್ಕು: 551324; ಸ್ವೀಕೃತಿ: 447884; ಒಟ್ಟು: 999208; ವಿಲೇ: 406479; ಬಾಕಿ: 592729; ಕಂದಾಯ ಶಾಖೆಯಲ್ಲಿ ಬಾಕಿ: 180910; ಭೂಮಾಪನ ಶಾಖೆಯಲ್ಲಿ ಬಾಕಿ: 411819<br><br>2021-22 ನೇ ಸಾಲಿನಲ್ಲಿ ರಾಜ್ಯದಲ್ಲಿ ತತ್ಕಾಲ್ ಪೋಡಿ, 11ಇ, 11ಇ (ಅನ್ಯಕ್ರಾಂತ), ಹದ್ದುಬಸ್ತು ಅಳತೆ ಕೋರಿ 4,47,884 ಅರ್ಜಿಗಳು ಸ್ವೀಕೃತವಾಗಿದ್ದು ಮತ್ತು ಹಿಂದಿನ ಬಾಕಿ 5,51,324 ಅರ್ಜಿಗಳು ಸೇರಿದಂತೆ ಒಟ್ಟು 9,99,208 ಸ್ವೀಕೃತ ವಾಗಿದ್ದು, ಇವುಗಳಲ್ಲಿ 4,06,479 ಅರ್ಜಿಗಳನ್ನು ವಿಲೇವಾರಿ ಮಾಡಲಾಗಿದೆ. 5,92,729 ಬಾಕಿ ಉಳಿದಿದ್ದು, 1,80,910 ಅರ್ಜಿಗಳು ಪಹಣಿ ತಿದ್ದುಪಡಿಗಾಗಿ ಕಂದಾಯ ಶಾಖೆಯಲ್ಲಿ ಮತ್ತು 4,11,819 ಪ್ರಕರಣಗಳು ಅಳತೆಗಾಗಿ ಭೂಮಾಪನ ಶಾಖೆಯಲ್ಲಿ ಬಾಕಿ ಇರುತ್ತವೆ. |
| ಆ) | ಸದರಿ ಅರ್ಜಿಗಳನ್ನು ವಿತರಣೆ ಮಾಡುವಲ್ಲಿ ಆಗಿರುವ ವಿಳಂಬದಿಂದ ರೈತರಿಗೆ ತುಂಬಾ ತೊಂದರೆ ಉಂಟಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಇ) | ತುರ್ತು ವಿಲೇವಾರಿಗೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು; (ವಿವರವನ್ನು ನೀಡುವುದು) | **ಪೋಡಿ / ಭೂಮಾಪನ ಮತ್ತು ನಕ್ಷೆಗಳ ವಿತರಣೆಯಲ್ಲಿ ಆಗುತ್ತಿರುವ ವಿಳಂಬವನ್ನು ತಪ್ಪಿಸಲು ಸರ್ಕಾರ ಕೈಗೊಂಡ ಕ್ರಮಗಳು**<br><br>1) ಇಲಾಖೆಯಲ್ಲಿ ಅಳತೆ ಕೋರಿ ಸ್ವೀಕೃತವಾಗುವ ಎಲ್ಲಾ ಅರ್ಜಿಗಳನ್ನು ಮೋಜಿಣಿ ತಂತ್ರಾಂಶದ ಮುಖಾಂತರ ಆನ್.ಲೈನ್ ನಲ್ಲಿ ಸ್ವೀಕರಿಸಲಾಗು ತ್ತಿದ್ದು.ತಂತ್ರಾಂಶದ ಪ್ರತಿ ಹಂತದಲ್ಲಿಯೂ FIFO (ಸರದಿ ಸಾಲಿನಂತೆ) ಅಳವಡಿಸಲಾಗಿದೆ. ಸರದಿ ಸಾಲಿನಂತೆ ಅಳತೆಗಾಗಿ ಭೂಮಾಪಕರಿಗೆ ತಂತ್ರಾಂಶದ ಮೂಲಕ ಆನ್‌ಲೈನ್ನಲ್ಲಿ ವಿತರಿಸಲಾಗುತ್ತಿದೆ. ಪ್ರಕರಣದಲ್ಲಿ ಅಳತೆಯಾದ ನಂತರ ಭೂಮಾಪಕರು ಕಡತಗಳನ್ನು ಹಂಚಿಕೆಯಾದ ಸರದಿ ಸಾಲಿನಂತೆ ಆನ್‌ಲೈನ್ನಲ್ಲಿ ಅಪ್‌ಲೋಡ್ ಮಾಡಲು ಹಾಗೂ ಅಪ್‌ಲೋಡ್ ಮಾಡಿರುವ ಕಡತಗಳ ಪರಿಶೀಲನೆ ಮತ್ತು ಅನುಮೋದನೆಯನ್ನು ಸಹಾ ತಂತ್ರಾಂಶದ ಮುಖಾಂತರ ಆನ್‌ಲೈನ್ನಲ್ಲೇ ಸರದಿ ಸಾಲಿನಂತೆ ನಿರ್ವಹಿಸುವ |

| | | |
|---|---|---|
| | | ಮೂಲಕ, ಪ್ರಕರಣಗಳ ವಿಲೇವಾರಿಯಲ್ಲಿ ಯಾವುದೇ ವಿಳಂಬಕ್ಕೆ ಅವಕಾಶವಿಲ್ಲದಂತೆ ಕ್ರಮವಹಿಸಲಾಗುತ್ತಿದೆ.<br>2) ನಿಯಮಿತವಾಗಿ ಕಂದಾಯ ಇಲಾಖೆಯಿಂದ ಪಹಣಿ ತಿದ್ದುಪಡಿ ಕುರಿತು ಕಂದಾಯ ಅದಾಲತ್ ಗಳನ್ನು ನಡೆಸಲಾಗುತ್ತಿದೆ<br>3) ನಮೂನೆ 1 ರಿಂದ 5 ಅನ್ನು ಭರ್ತಿ ಮಾಡಲು ಅಗತ್ಯ ಸೂಚನೆ ಮತ್ತು ಮಾರ್ಗಸೂಚಿಗಳನ್ನು ನೀಡಲಾಗಿದೆ.<br>4) ಕಾಲಕಾಲಕ್ಕೆ ವಿಡಿಯೋ ಸಂವಾದ ಮತ್ತು ವಿಭಾಗವಾರು ಅಧಿಕಾರಿಗಳ ಸಭೆ ನಡೆಸಿ ಪ್ರಗತಿ ಪರಿಶೀಲನೆ ಮಾಡಿ ಹೆಚ್ಚಿನ ಪ್ರಗತಿ ಸಾಧಿಸಲು ಸೂಕ್ತ ಮಾರ್ಗದರ್ಶನ ಮತ್ತು ಅಗತ್ಯ ಸೂಚನೆ ನೀಡಲಾಗುತ್ತಿದೆ.<br>5) ಹೆಚ್ಚಿನ ಪ್ರಕರಣಗಳು ಬಾಕಿ ಇರುವ ತಾಲ್ಲೂಕುಗಳಿಗೆ ಕಡಿಮೆ ಪ್ರಕರಣಗಳು ಬಾಕಿ ಇರುವ ತಾಲ್ಲೂಕಿನಿಂದ ಭೂಮಾಪಕರನ್ನು ನಿಯೋಜನೆ ಮಾಡಿ ಪ್ರಕರಣಗಳನ್ನು ವಿಲೇಗೊಳಿಸಲು ಕ್ರಮ ಕೈಗೊಳ್ಳಲಾಗುತ್ತಿದೆ.<br>6) ಹೊಸದಾಗಿ 2072 ಪರವಾನಗಿ ಭೂಮಾಪಕರ ಆಯ್ಕೆ ಕುರಿತು ಅರ್ಜಿಗಳನ್ನು ಆಹ್ವಾನಿಸಿ, ದಿನಾಂಕ 1-2-2021 & 2-2-2021 ರಂದು ಸ್ಪರ್ಧಾತ್ಮಕ ಪರೀಕ್ಷೆಯನ್ನು ನಡೆಸಿ, ಜಿಲ್ಲಾವಾರು ಅರ್ಹ ಅಭ್ಯರ್ಥಿಗಳನ್ನು ಆಯ್ಕೆ ಮಾಡಿ ತರಬೇತಿ ನಂತರ ಉತ್ತೀರ್ಣವಾದ 841 ಜನರಿಗೆ ಪರವಾನಗಿ ನೀಡಿ ರಾಜ್ಯದ ವಿವಿಧ ತಾಲ್ಲೂಕುಗಳಿಗೆ ನಿಯೋಜಿಸಿದ್ದು, ನಿಯೋಜಿತ ತಾಲ್ಲೂಕುಗಳಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಇಲಾಖಾ ತರಬೇತಿ ಪೂರ್ಣಗೊಳಿಸಿರುವ 438 ಜನ ಪರವಾನಗಿ ಭೂಮಾಪಕರಿಗೆ ವಿವಿಧ ತಾಲ್ಲೂಕುಗಳಿಗೆ ಕೌನ್ಸಿಲಿಂಗ್ ಮೂಲಕ ಸ್ಥಳ ನಿಯೋಜನೆ ಮಾಡಲಾಗಿದೆ. ಪ್ರಸ್ತುತ 508 ಪರವಾನಗಿ ಭೂಮಾಪಕರು ತರಬೇತಿ ಪಡೆಯುತ್ತಿದ್ದು, ತರಬೇತಿ ನಂತರ ಉತ್ತೀರ್ಣರಾದವರಿಗೆ ಪರವಾನಗಿ ನೀಡಿ ರಾಜ್ಯದ ವಿವಿಧ ತಾಲ್ಲೂಕುಗಳಿಗೆ ಕಾರ್ಯ ನಿಯೋಜಿಸಲಾಗುತ್ತಿದೆ.<br>ಮುಂದುವರಿದು, ಇಲಾಖೆಯಲ್ಲಿ ಲಭ್ಯವಿರುವ ಸರ್ಕಾರಿ ಹಾಗೂ ಪರವಾನಗಿ ಭೂಮಾಪಕರುಗಳನ್ನು ಸಮರ್ಪಕವಾಗಿ ಬಳಸಿಕೊಳ್ಳುವ ಸಲುವಾಗಿ ಕಾರ್ಯ ಹಂಚಿಕೆ ವಿಧಾನವನ್ನು ತಿದ್ದುಪಡಿ ಮಾಡಲು ವಿಧೇಯಕವನ್ನು ಸಹ ಮಂಡಿಸಲಾಗಿದೆ.<br>ಈ ರೀತಿಯ ಕ್ರಮಗಳ ಮೂಲಕ ಬಾಕಿ ಪ್ರಕರಣಗಳನ್ನು ವಿಲೇವಾರಿ ಮಾಡಲಾಗುತ್ತಿದೆ |
| ಈ) | ಜಿಯೋ ಸ್ಪೇಸ್ ತಂತ್ರಜ್ಞಾನವನ್ನು ಬಳಸಿಕೊಂಡು ಪೋಡಿ / ಭೂಮಾಪನ ಮತ್ತು ನಕ್ಷೆಗಳನ್ನು ತಯಾರು ಮಾಡಲು ಸರ್ಕಾರ ಚಿಂತಿಸಿದೆಯೇ; | ರಾಜ್ಯದಲ್ಲಿ ಅತ್ಯಾಧುನಿಕ ತಂತ್ರಜ್ಞಾನವಾದ ಡ್ರೋಣ್ ಬಳಸಿ ಸರ್ವೆ ಆಫ್ ಇಂಡಿಯಾ ಸಂಸ್ಥೆಯ ಸಹಯೋಗದೊಂದಿಗೆ ರಾಜ್ಯದಲ್ಲಿ ಮರು ಭೂಮಾಪನ ಕೈಗೊಳ್ಳಲು ನಿರ್ಧರಿಸಲಾಗಿದೆ. ಮೊದಲನೇ ಹಂತದಲ್ಲಿ 5 ಜಿಲ್ಲೆಗಳಲ್ಲಿ ಮತ್ತು ಎರಡನೇ ಹಂತದಲ್ಲಿ 8 ಜಿಲ್ಲೆಗಳಲ್ಲಿ ಮರು ಭೂಮಾಪನ ಕಾರ್ಯ ಕೈಗೊಳ್ಳಲು |

| | | |
|---|---|---|
| ಉ) | ಹಾಗಿದ್ದಲ್ಲಿ, ಯಾವ ಕಾಲಮಿತಿಯಲ್ಲಿ ಸದರಿ ತಂತ್ರಜ್ಞಾನವನ್ನು ಬಳಸಿಕೊಳ್ಳಲಾಗುವುದು? | ಆದೇಶಿಸಲಾಗಿದೆ. ಅದರಂತೆ ಪೂರ್ವಸಿದ್ಧತೆ ಕಾರ್ಯ ಪ್ರಾರಂಭಿಸಲಾಗಿದ್ದು, ಪ್ರಾಯೋಗಿಕವಾಗಿ ರಾಮನಗರ ಮತ್ತು ತುಮಕೂರು ಜಿಲ್ಲೆಗಳಲ್ಲಿ ಡ್ರೋನ್ ಸರ್ವೆ ಕಾರ್ಯವನ್ನು ಪ್ರಾರಂಭಿಸಿ, ಗ್ರೌಂಡ್ ಕಂಟ್ರೋಲ್ ಪಾಯಿಂಟ್‌ಗಳನ್ನು ಸ್ಥಾಪಿಸಿದ್ದು, ಡ್ರೋನ್ Flying ಕಾರ್ಯವನ್ನು ಪ್ರಾರಂಭಿಸ ಲಾಗಿರುತ್ತದೆ. ಅದೇ ರೀತಿಯಾಗಿ ಹಂತ ಹಂತವಾಗಿ ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿಯೂ ಸಹಾ ಮರುಭೂಮಾಪನ ಕಾರ್ಯ ಕೈಗೊಳ್ಳಲು ಉದ್ದೇಶಿಸಲಾಗಿದೆ. ಈಗಾಗಲೇ ರಾಜ್ಯದಲ್ಲಿ ಭೂಮಾಪನ ಕಾರ್ಯದಲ್ಲಿ ಆಧುನಿಕ ತಂತ್ರಜ್ಞಾನವನ್ನು ಬಳಸಿಕೊಳ್ಳಲಾಗುತ್ತಿದೆ. |

ಸಂಖ್ಯೆ: ಕಂಇ 229 ಎಸ್‌ಎಸ್‌ಸಿ 2021

(ಆರ್.ಅಶೋಕ)
ಕಂದಾಯ ಸಚಿವರು